KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೨ | ಬೆಂಗಳೂರು, ಗುರುವಾರ, ಮಾರ್ಚ್ ೨೨, ೨೦೦೭ (ಚೈತ್ರ ೧, ಶಕ ವರ್ಷ ೧೯೨೯) | ಸಂಚಿಕೆ ೧೨ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಶಿಕ್ಷಣ ಸಚಿವಾಲಯ

**ವಿಷಯ:** ಕಾಲೇಜು ಶಿಕ್ಷಣ ಇಲಾಖೆಯ ಖಾಸಗಿ ಅನುದಾನಿತ ಕಾಲೇಜುಗಳಲ್ಲಿ ಉಪನ್ಯಾಸಕರುಗಳಾಗಿ ಸೇವಾ ಸಕ್ರಮಗೊಂಡ ಅರೆಕಾಲಿಕ ಉಪನ್ಯಾಸಕರುಗಳಾಗಿ ಸೇವಾ ಸಕ್ರಮಗೊಂಡ ಅರೆಕಾಲಿಕ ಉಪನ್ಯಾಸಕರುಗಳಿಗೆ ಎನ್.ಇ.ಟಿ/ ಎಸ್.ಎಲ್.ಇ.ಟಿ. ವಿದ್ಯಾರ್ಹತೆ ಪಡೆಯಲು ಹೆಚ್ಚಿನ ಕಾಲಾವಕಾಶ ನೀಡುವ ಕುರಿತು.

**ಓದಲಾಗಿದೆ:** 1. ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 56 ಯುಪಿಸಿ 97 ದಿನಾಂಕ:12.02.2004.

2. ಸರ್ಕಾರಿ ಆದೇಶ ಸಂಖ್ಯೆ: ಇಡಿ 119 ಡಿಸಿಇ 2005 ದಿನಾಂಕ:16.09.2006.

3. ಕಾಲೇಜು ಶಿಕ್ಷಣ ಆಯುಕ್ತರ ಪತ್ರ ಸಂಖ್ಯೆ: ಕಾಶಿಇ/ 38/ ಯುಜಿಸಿ/ 2006-07/ ಪಿಸಿಸಿ-3 ದಿನಾಂಕ:08.02.2007.

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ದಿನಾಂಕ:12.02.2004ರ Karnataka Educational Institutions (Absorption of persons working as Part time Lecturers in the Aided Private Educational Institutions) ( Special) Rules, 2003ನ್ನು ಹೊರಡಿಸಲಾಗಿದ್ದು, ಅದರನ್ವಯ ಕಾಲೇಜು ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿನ ಖಾಸಗಿ ಅನುದಾನಿತ ಕಾಲೇಜುಗಳಲ್ಲಿ 1993-94 ಮತ್ತು 1994-95ನೇ ಶೈಕ್ಷಣಿಕ ಸಾಲುಗಳಲ್ಲಿ ಅರೆಕಾಲಿಕ ಉಪನ್ಯಾಸಕರುಗಳಾಗಿ ಸೇವೆ ಸಲ್ಲಿಸಿದವರ ಸೇವೆಯನ್ನು ರಾಜ್ಯ ವೇತನ ಶ್ರೇಣಿಗಳನ್ನು ನೀಡಿ ವಿಲೀನಗೊಳಿಸಲಾಗಿದ್ದು, ಇವರುಗಳ ದಿನಾಂಕ:12.02.2004 ರಿಂದ ಮೂರು ವರ್ಷಗಳಲ್ಲಿ ಅಂದರೆ, ದಿನಾಂಕ:12.02.2007ರೊಳಗೆ ಎನ್.ಇ.ಟಿ./ ಎಸ್.ಎಲ್.ಇ.ಟಿ. ಪರೀಕ್ಷೆಯಲ್ಲಿ ಪಾಸು ಮಾಡದಿದ್ದಲ್ಲಿ ಸೇವೆಯಿಂದ ವಜಾಗೊಳಿಸುವ ಷರತ್ತನ್ನು ವಿಧಿಸಲಾಗಿತ್ತು. ಆ ಪ್ರಕಾರ ನಿಗದಿತ ಅವಧಿಯು ದಿನಾಂಕ:12.02.2007ಕ್ಕೆ ಅಂತ್ಯಗೊಳ್ಳುತ್ತದೆ.

ಈ ಮಧ್ಯೆ ಯು.ಜಿ.ಸಿ.ಯು. ದಿನಾಂಕ:14.06.2006ರಂದು ಯು.ಜಿ.ಸಿ. ರೆಗ್ಯೂಲೇಷನ್‌ಗೆ ತಿದ್ದುಪಡಿ ತಂದು, ಪದವಿ ಹಂತಕ್ಕೆ ಎಂ.ಫಿಲ್. ಇದ್ದಲ್ಲಿ ಎನ್.ಇ.ಟಿ. ಪಾಸು ಮಾಡುವುದರಿಂದ ವಿನಾಯಿತಿ ನೀಡಿ ಆದೇಶಿಸಿದೆ. ಈ ರೀತಿ ಬದಲಾದ ಸನ್ನಿವೇಶದಲ್ಲಿ ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ದಿನಾಂಕ:16.09.2006ರಲ್ಲಿ ಕಾಲೇಜು ಶಿಕ್ಷಣ ಇಲಾಖೆಯ ಅರೆಕಾಲಿಕ ಉಪನ್ಯಾಸಕರುಗಳು ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಉಪನ್ಯಾಸಕರುಗಳಾಗಿ ಸೇವಾ ಸಕ್ರಮಾತಿಗೊಂಡು ಈವರೆವಿಗೂ ಎನ್.ಇ.ಟಿ./ ಎಸ್.ಎಲ್.ಇ.ಟಿ. ಪರೀಕ್ಷೆಯನ್ನು ಪಾಸು ಮಾಡದಿರುವ ಈವರೆವಿಗೆ ಎನ್.ಇ.ಟಿ./ ಎಸ್.ಎಲ್.ಇ.ಟಿ. ಪರೀಕ್ಷೆಯನ್ನು ಪಾಸು ಮಾಡದಿರುವ ಉಪನ್ಯಾಸಕರುಗಳಿಗೆ ಸದರಿ ಆದೇಶ ಹೊರಡಿಸಿದ ದಿನಾಂಕದಿಂದ ಅನ್ವಯವಾಗುವಂತೆ 03 ವರ್ಷದ ಒಳಗೆ ಅಂದರೆ, ದಿನಾಂಕ:16.09.2009ರ ವರೆಗೆ ಎಂ.ಫಿಲ್. ವಿದ್ಯಾರ್ಹತೆಯನ್ನು ಹೊಂದಲು ಹೆಚ್ಚಿನ ಕಾಲಾವಕಾಶ ನೀಡಲಾಗಿರುತ್ತದೆ.

ಮೇಲೆ ಕ್ರಮಾಂಕ (3)ರಲ್ಲಿ ಓದಲಾದ ದಿನಾಂಕ:08.02.2007ರ ಪತ್ರದಲ್ಲಿ ಕಾಲೇಜು ಶಿಕ್ಷಣ ಆಯುಕ್ತರು ಖಾಸಗಿ ಅನುದಾನಿತ ಕಾಲೇಜುಗಳಲ್ಲಿ 1993-94 ಮತ್ತು 1994-95ನೇ ಶೈಕ್ಷಣಿಕ ಸಾಲುಗಳಲ್ಲಿ ಅರೆಕಾಲಿಕ ಉಪನ್ಯಾಸಕರುಗಳಾಗಿ ಸೇವೆ ಸಲ್ಲಿಸಿದವರ ಸೇವೆಯನ್ನು ರಾಜ್ಯ ವೇತನ ಶ್ರೇಣಿಗಳನ್ನು ನೀಡಿ ವಿಲೀನಗೊಳಿಸಲಾಗಿದ್ದು, ಇವರುಗಳು ದಿನಾಂಕ:12.02.2004 ರಿಂದ ಮೂರು ವರ್ಷಗಳಲ್ಲಿ ಅಂದರೆ, ದಿನಾಂಕ:12.02.2007ರೊಳಗೆ ಎನ್.ಇ.ಟಿ./ ಎಸ್.ಎಲ್.ಇ.ಟಿ. ಪರೀಕ್ಷೆಯಲ್ಲಿ ಪಾಸು ಮಾಡಲು ಕಾಲಾವಕಾಶ ನೀಡಲಾಗಿರುತ್ತದೆಂದು ಪ್ರಸ್ತಾಪಿಸಿ ಈ ಬಗ್ಗೆ ಯಾವ ಕ್ರಮ ಜರುಗಿಸಬೇಕೆಂದು ಸರ್ಕಾರದ ಆದೇಶ ಕೋರಿರುತ್ತಾರೆ.

ಕಾಲೇಜು ಶಿಕ್ಷಣ ಇಲಾಖೆಯ ಖಾಸಗಿ ಅನುದಾನಿತ ಕಾಲೇಜುಗಳಲ್ಲಿ ಉಪನ್ಯಾಸಕರುಗಳಾಗಿ ಸೇವಾ ಸಕ್ರಮಗೊಂಡ ಅರೆಕಾಲಿಕ ಉಪನ್ಯಾಸಕರುಗಳಿಗೆ ಎನ್.ಇ.ಟಿ./ ಎಸ್.ಎಲ್.ಇ.ಟಿ. ವಿದ್ಯಾರ್ಹತೆ ಪಡೆಯಲು ಹೆಚ್ಚಿನ ಕಾಲಾವಕಾಶ ನೀಡುವ ಕುರಿತು ಮಾನ್ಯ ಉನ್ನತ ಶಿಕ್ಷಣ

ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ:03.02.2007ರಂದು ನಡೆದ ಸಭೆಯಲ್ಲಿ ಈ ವಿಷಯವನ್ನು ಸಮಗ್ರವಾಗಿ ಚರ್ಚಿಸಿ ಪರಿಶೀಲಿಸಲಾಯಿತು. ಸರ್ಕಾರಿ ಹಾಗೂ ಖಾಸಗಿ ಅನುದಾನಿತ ಕಾಲೇಜುಗಳಲ್ಲಿನ ಅರೆಕಾಲಿಕ ಉಪನ್ಯಾಸಕರ ನೇಮಕಾತಿಯು ಒಂದೇ ರೀತಿ ಇದ್ದು, ಸರ್ಕಾರಿ ಕಾಲೇಜುಗಳ ಅರೆಕಾಲಿಕ ಉಪನ್ಯಾಸಕರುಗಳಿಗೆ ಎನ್.ಇ.ಟಿ./ ಎಸ್.ಎಲ್.ಇ.ಟಿ. ಪಾಸು ಮಾಡಲು ಯಾವ ರೀತಿ ಕಾಲಾವಕಾಶವನ್ನು ವಿಸ್ತರಿಸಲಾಗಿದೆಯೇ ಅದೇ ರೀತಿ ಖಾಸಗಿ ಅನುದಾನಿತ ಕಾಲೇಜುಗಳಲ್ಲಿನ ಅರೆಕಾಲಿಕ ಉಪನ್ಯಾಸಕರುಗಳಿಗೂ ದಿನಾಂಕ:16.09.2009ರ ಅವಧಿವರೆಗೆ ವಿಸ್ತರಿಸಲು ತೀರ್ಮಾನಿಸಲಾಯಿತು. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 37 ಯುಪಿಸಿ 2007, ಬೆಂಗಳೂರು, ದಿನಾಂಕ:9ನೇ ಫೆಬ್ರವರಿ, 2007**

ಪ್ರಸ್ತಾವನೆ ಭಾಗದಲ್ಲಿ ವಿವರಿಸಿರುವ ಸನ್ನಿವೇಶದಲ್ಲಿ ಕಾಲೇಜು ಶಿಕ್ಷಣ ಇಲಾಖೆಯ ಖಾಸಗಿ ಅನುದಾನಿತ ಕಾಲೇಜುಗಳಲ್ಲಿ ಉಪನ್ಯಾಸಕರುಗಳಾಗಿ ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 56 ಯುಪಿಸಿ 97 ದಿನಾಂಕ:12.02.2004ರನ್ವಯ ಸೇವಾ ಸಕ್ರಮಗೊಂಡ ಅರೆಕಾಲಿಕ ಉಪನ್ಯಾಸಕರುಗಳಿಗೆ ಎನ್.ಇ.ಟಿ./ ಎಸ್.ಎಲ್.ಇ.ಟಿ./ ಎಂ.ಫಿಲ್./ ಪಿ.ಹೆಚ್.ಡಿ. ಪರೀಕ್ಷೆಯನ್ನು ಪಾಸು ಮಾಡದಿರುವ ಉಪನ್ಯಾಸಕರುಗಳು ದಿನಾಂಕ:16.09.2009 ರೊಳಗೆ ಮೇಲ್ಕಂಡ ವಿದ್ಯಾರ್ಹತೆಯನ್ನು ಹೊಂದತಕ್ಕದ್ದು. ತಪ್ಪಿದ್ದಲ್ಲಿ, ಮುಂದಿನ ಯಾವುದೇ ಮುನ್ಸೂಚನೆ ನೀಡದೇ ಸದರಿ ಪರೀಕ್ಷೆ ಪಾಸು ಮಾಡದ ಉಪನ್ಯಾಸಕರುಗಳನ್ನು ಸೇವೆಯಿಂದ ವಜಾಗೊಳಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಬಸವರಾಜು**

ಪಿ.ಆರ್. 332

ಸರ್ಕಾರದ ಉಪ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ)

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಎಂ.ಆರ್. ನಾಟೀಕಾರ, ಹಿಂದಿನ ತಹಶೀಲ್ದಾರ್, ಚಿತ್ತಾಪುರ ಮತ್ತಿತರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಆರ್.ಡಿ.57 ಎಡಿಇ 2005, ದಿನಾಂಕ:10.08.2006.

2. ಶ್ರೀ ಎಸ್.ಜಿ. ಪಲ್ಲೇದ, ನಿವೃತ್ತ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು, ಇವರ ಪತ್ರದ ಸಂಖ್ಯೆ: ಜಿಗ್ರಾವೇ: ಅಧ್ಯಕ್ಷರು/ ಡಿಇ 2006, ದಿನಾಂಕ:05.09.2006.

**ಪ್ರಸ್ತಾವನೆ:**

ಗುಲ್ಬರ್ಗಾ ಜಿಲ್ಲೆ, ಚಿತ್ತಾಪುರ ತಾಲ್ಲೂಕು, ದೊಣ್ಣೂರು ಗ್ರಾಮದ ಸರ್ವೆ ಸಂಖ್ಯೆ: 16ರಲ್ಲಿ 10 ಎಕರೆ 19 ಗುಂಟೆ ಜಮೀನನ್ನು ಭೂ ನ್ಯಾಯ ಮಂಡಳಿಯ ವತಿಯಿಂದ ಶ್ರೀಮತಿ ಕಮಲಾಬಾಯಿ ಎಂಬುವವರಿಗೆ ಮಂಜೂರಾಗಿದ್ದು, ಅದರಂತೆ ಅವರ ಹೆಸರಿನಲ್ಲಿ ಪಹಣಿ ಮತ್ತು ಅದರ ದಾಖಲೆಗಳನ್ನು ಹೊಂದಿದ್ದರೂ ಸಹ ಸೇಡಂ ಉಪವಿಭಾಗಾಧಿಕಾರಿಯವರ ಆದೇಶದಂತೆ ಈ ಜಮೀನಿನ ಮೊದಲನೇ ಮಾಲೀಕರಾದ ಶ್ರೀ ಅಣ್ಣಾರಾವ್ ತಂದೆ ಸದಾಶಿವಪ್ಪ ಎಂಬುವವರ ಹೆಸರಿಗೆ ಪಹಣಿ ಹಾಗೂ ಖಾತೆಯನ್ನು ಬದಲಾವಣೆ ಮಾಡಿರುತ್ತಾರೆಂಬ ಕಾರಣಕ್ಕಾಗಿ ಚಿತ್ತಾಪುರ ತಾಲ್ಲೂಕು ತಹಶೀಲ್ದಾರರಾದ ಶ್ರೀ ಆರ್.ಎಂ. ನಾಟೀಕಾರ, ಕಂದಾಯ ನಿರೀಕ್ಷಕರಾದ ಶ್ರೀ ಕಂಠೆಪ್ಪ ಹಾಗೂ ಶ್ರೀ ಸುಭಾಷಚಂದ್ರ, ಗ್ರಾಮಲೆಕ್ಕಿಗ, ಇವರುಗಳ ಮೇಲೆ ಹೊರಿಸಿದ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಇಲಾಖಾ ವಿಚಾರಣೆಯನ್ನು ಜರುಗಿಸಲು ಶ್ರೀ ಎಸ್.ಜಿ. ಪಲ್ಲೇದ, ನಿವೃತ್ತ ನ್ಯಾಯಾಧೀಶರು, ಗದಗ್, ಇವರನ್ನು ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಶ್ರೀ ಎಸ್.ಜಿ. ಪಲ್ಲೇದ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು, ಇವರು ಪ್ರಸ್ತುತ ಜಿಲ್ಲಾ ಗ್ರಾಹಕರ ವೇದಿಕೆ, ಗದಗದಲ್ಲಿ ಪೂರ್ಣ ಕಾಲಿಕ ಅಧ್ಯಕ್ಷರಾಗಿ ನೇಮಕ ಹೊಂದಿ ವೇತನ ಮತ್ತು ಭತ್ಯೆ ಪಡೆಯುತ್ತಿರುವುದರಿಂದ, ಈ ಇಲಾಖಾ ವಿಚಾರಣೆ ಕಾರ್ಯ ನಿರ್ವಹಿಸಲು ಸಾಧ್ಯವಾಗದು ಎಂದು ತಿಳಿಸಿರುತ್ತಾರೆ.

ಈ ಹಿನ್ನಲೆಯಲ್ಲಿ ಶ್ರೀ ಎಸ್.ಜಿ. ಪಲ್ಲೇದ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರ ಬದಲಿಗೆ ಬೇರೊಬ್ಬ ವಿಚಾರಣಾಧಿಕಾರಿಯನ್ನು ನೇಮಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 57 ಎಇಡಿ 2005, ಬೆಂಗಳೂರು, ದಿನಾಂಕ:2ನೇ ಫೆಬ್ರವರಿ, 2007**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 13ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಸ್.ಜಿ. ಪಲ್ಲೇದ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಗದಗ, ಇವರ ಬದಲಿಗೆ ಶ್ರೀ ಪಿ.ಜಿ. ಕುಲಕರ್ಣಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಆಫೀಸ್ ಆಫ್ ಶ್ರೀ ವಿ.ಜಿ. ತಿವಾರಿ, ಅಡ್ವೋಕೇಟ್ ಭಾಲ್ಕಿ, ಬೀದರ್ ಜಿಲ್ಲೆ, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ ಹಾಗೂ ಮಂಡನಾಧಿಕಾರಿಯಾಗಿ ಗುಲ್ಬರ್ಗಾ ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಾಯಕರನ್ನೇ ಮುಂದುವರೆಸಿದೆ.

ವಿಚಾರಣಾಧಿಕಾರಿಗಳು ಈ ಪ್ರಕರಣದ ವಿಚಾರಣೆಯನ್ನು ಬೀದರ್ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ನಡೆಸತಕ್ಕದ್ದು ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನಿ ಸಾಮಗ್ರಿಗಳನ್ನು ಜಿಲ್ಲಾಧಿಕಾರಿಗಳು ಬೀದರ್ ಇವರು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ರೂ.6,000-00 (ಆರು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ದಿನಾಂಕ:23.08.2005ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 16 ಸೇಇವಿ 2005ರನ್ವಯ ಹಾಗೂ ಸಿಆಸುಇ 45 ಸೇಎವಿ 2001ರನ್ವಯ ರೂ.1,000-00 (ಒಂದು ಸಾವಿರ ರೂಪಾಯಿಗಳು ಮಾತ್ರ) ವಾಹನ ಭತ್ಯೆ (ಕನ್ವೇಯನ್ಸ್ ಅಲೋಯನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಗುಲ್ಬರ್ಗಾ ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು. ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ

ನಿಯಮಾವಳಿಗಳ ನಿಯಮ 11 ಮತ್ತು 11ಎ ರಲ್ಲಿನ ವಿಧಿವಿಧಾನಗಳನ್ನು ಅನುಸರಿಸಿ, ಜರುಗಿಸಿ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ**

ಪಿ.ಆರ್. 333

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು-3)

**ವಿಷಯ:** ಶ್ರೀ ಕೃಷ್ಣಪ್ಪ ಪೂಜಾರಿ, ಹಿಂದಿನ ತಹಶೀಲ್ದಾರ್, ಬಂಟ್ವಾಳ (ಈಗ ನಿವೃತ್ತರು) ಹಾಗೂ ಇತರರ ವಿರುದ್ಧದ ಜಂಟಿ ಇಲಾಖಾ ವಿಚಾರಣೆ- ಶ್ರೀ ಕೃಷ್ಣಪ್ಪ ಪೂಜಾರಿ, ಇವರಿಗೆ ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಆರ್.ಡಿ.60 ಎಡಿಇ 2004, ದಿನಾಂಕ:21.12.2004.

2. ಶ್ರೀ ಎನ್.ಸಿ. ಲಕ್ಷ್ಮೀನರಸಿಂಹಯ್ಯ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು ಇವರ ದಿನಾಂಕ:31.05.2005ರ ವಿಚಾರಣಾವರದಿ.
3. ಎರಡನೇ ಕಾರಣ ಕೇಳುವ ನೋಟೀಸು ಸಂಖ್ಯೆ: ಆರ್‌ಡಿ 60 ಎಡಿಇ 2004 ದಿನಾಂಕ:12.09.2005.
4. ಶ್ರೀ ಕೃಷ್ಣಪ್ಪ ಪೂಜಾರಿ ಇವರ ಲಿಖಿತ ಸಮಜಾಯಿಷಿ ದಿನಾಂಕ:18.10.2005.
5. ಸರ್ಕಾರದ ಆದೇಶ ಸಂಖ್ಯೆ: 60 ಎಡಿಇ 2004, ದಿನಾಂಕ:29.06.2006.
6. ಕರ್ನಾಟಕ ಲೋಕಸೇವಾ ಆಯೋಗದ ಪತ್ರದ ಸಂಖ್ಯೆ: PSC 97 CNS 06, Dt:18.10.2006.

**ಪ್ರಸ್ತಾವನೆ:**

ಬಂಟ್ವಾಳ ತಾಲ್ಲೂಕು ಕೇಪು ಗ್ರಾಮದ ಟಿ.ಎನ್.ಸಿ.ನಂ.1111:74-75ನೇ ಕಡತದಲ್ಲಿನ ಮೂಲ ತೀರ್ಪನ್ನು ಹಾಗೂ ಮೂಲ ಮಂಜೂರುದಾರರ ಹೆಸರನ್ನು ಅಕ್ರಮವಾಗಿ ತಿದ್ದಿದ ಮತ್ತು ಎರಡನೇ ಸಲ ಫಾರಂ ನಂ.10ನ್ನು ನೀಡಿದ ಬಗ್ಗೆ ಬಂಟ್ವಾಳ ತಾಲ್ಲೂಕಿನ ಹಿಂದಿನ ತಹಶೀಲ್ದಾರರಾದ ಶ್ರೀ ಕೃಷ್ಣಪ್ಪ ಪೂಜಾರಿ, ಶ್ರೀ ಲಕ್ಷ್ಮಣಭಟ್, ಶಿರಸ್ತೇದಾರ್, ಶ್ರೀ ಇಬ್ರಾಹಿಂ, ಕಂದಾಯ ನಿರೀಕ್ಷಕರು ಶ್ರೀ ಪ್ರಸನ್ನ ಕುಮಾರ್ ಪಕ್ಕಳ, ಗ್ರಾಮ ಕರಣಿಕ ಹಾಗೂ ಶ್ರೀ ಉಮೇಶಮರೋಳಿ, ದ್ವಿ.ದ.ಸ. ಇವರುಗಳ ವಿರುದ್ಧ ಇಲಾಖಾ ವಿಚಾರಣೆ ಮಾಡಲು ಶ್ರೀ ಎನ್.ಸಿ. ಲಕ್ಷ್ಮೀನರಸಿಂಹಯ್ಯ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮೇಲೆ ಕ್ರ.ಸಂ.(1)ರಲ್ಲಿ ಓದಲಾದ ದಿನಾಂಕ:21.12.2004ರ ಸರ್ಕಾರಿ ಆದೇಶದಲ್ಲಿ ನೇಮಿಸಲಾಗಿತ್ತು.

ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಗಳು ಜಂಟಿ ಇಲಾಖಾ ವಿಚಾರಣೆ ಜರುಗಿಸಿ ಮೇಲೆ ಓದಲಾದ ಕ್ರ.ಸಂ. (2)ರಲ್ಲಿ ದಿನಾಂಕ:31.05.2005ರಂದು ತಮ್ಮ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದು, ಅದರಲ್ಲಿ ಶ್ರೀ ಕೃಷ್ಣಪ್ಪ ಪೂಜಾರಿ, ಹಿಂದಿನ ತಹಶೀಲ್ದಾರ್, ಬಂಟ್ವಾಳ (ಈಗ ನಿವೃತ್ತರು) ಶ್ರೀ ಇಬ್ರಾಹಿಂ, ಕಂದಾಯ ನಿರೀಕ್ಷಕ, ಶ್ರೀ ಪ್ರಸನ್ನಕುಮಾರ್ ಪಕ್ಕಳ, ಗ್ರಾಮ ಕರಣಿಕ ಮತ್ತು ಶ್ರೀ ಉಮೇಶಮರೋಳಿ, ದ್ವಿ.ದ.ಸ. ಇವರ ವಿರುದ್ಧದ ಆರೋಪಗಳು ಸಾಬೀತಾಗಿರುವುದಾಗಿ ವರದಿ ಮಾಡಿರುತ್ತಾರೆ. ವಿಚಾರಣಾಧಿಕಾರಿಯವರ ವರದಿಯನ್ನು ಸರ್ಕಾರವು ಒಪ್ಪಿ ಶ್ರೀ ಕೃಷ್ಣಪ್ಪ ಪೂಜಾರಿ ಇವರಿಗೆ ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿನಾಂಕ:12.09.2005ರಲ್ಲಿ 2ನೇ ಕಾರಣ ಕೇಳುವ ನೋಟೀಸನ್ನು ನೀಡಲಾಗಿರುತ್ತದೆ. ಹಾಗೂ ಈ ನೋಟೀಸಿಗೆ ಸದರಿಯವರಿಯವರು ಮೇಲೆ ಕ್ರ.ಸಂ.(4)ರಲ್ಲಿ ಓದಲಾದ ದಿನಾಂಕ:18.10.2005 ರಂದು ತಮ್ಮ ಲಿಖಿತ ಸಮಜಾಯಿಷಿಯನ್ನು ನೀಡಿ ತಮ್ಮ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿರುವುದನ್ನು ಒಪ್ಪಿಕೊಂಡಿರುವುದಿಲ್ಲ.

ಮೇಲೆ ಓದಲಾದ ಕ್ರ.ಸಂ. (5)ರಲ್ಲಿ ಶ್ರೀ ಇಬ್ರಾಹಿಂ, ಕಂದಾಯ ನಿರೀಕ್ಷಕರು, ಶ್ರೀ ಪ್ರಸನ್ನಕುಮಾರ್ ಪಕ್ಕಳ, ಗ್ರಾಮ ಕರಣಿಕ ಮತ್ತು ಶ್ರೀ ಉಮೇಶ್‌ಮರೋಳಿ, ದ್ವಿ.ದ.ಸ. ಇವರಿಗೆ ದಂಡನೆ ವಿಧಿಸಿ ಆದೇಶಿಸಲಾಗಿರುತ್ತದೆ. ಮೇಲೆ ಕ್ರ.ಸಂ. (6) ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ಸರ್ಕಾರವು ಆಪಾದಿತ ನಿವೃತ್ತ ಸರ್ಕಾರಿ ಅಧಿಕಾರಿಗೆ ವಿಧಿಸಲು ಉದ್ದೇಶಿಸಿರುವ ದಂಡನೆಗೆ ಸಹಮತಿ ನೀಡಿರುತ್ತದೆ. ಈ ಹಿನ್ನಲೆಯಲ್ಲಿ ಈ ಪ್ರಕರಣದಲ್ಲಿನ ವಿಚಾರಣಾ ವರದಿಯ ಆಧಾರದ ಮೇಲೆ ಹಾಗೂ ಅವರ ವಿರುದ್ಧದ ಆರೋಪಗಳು ಸಾಬೀತಾಗಿರುವ ಹಿನ್ನಲೆಯಲ್ಲಿ ಶ್ರೀ ಕೃಷ್ಣಪ್ಪ ಪೂಜಾರಿ, ಹಿಂದಿನ ತಹಶೀಲ್ದಾರ್, ಬಂಟ್ವಾಳ (ಈಗ ನಿವೃತ್ತರು) ಇವರು ಎರಡನೇ ಕಾರಣ ಕೇಳುವ ನೋಟೀಸಿಗೆ ನೀಡಿರುವ ಸಮಜಾಯಿಷಿ ಇವುಗಳನ್ನು ಸರ್ಕಾರವು ಪರಿಶೀಲಿಸಿ, ಶ್ರೀಯುತರ ವಿರುದ್ಧ ಮಾಡಲಾಗಿದ್ದ ಆರೋಪಗಳಲ್ಲಿ ಎರಡು ಆರೋಪಗಳೂ ಸಾಬೀತಾಗಿರುವುದನ್ನು ಪರಿಗಣಿಸಿ, ಸರ್ಕಾರವು ಸೂಕ್ತ ದಂಡನೆಯನ್ನು ವಿಧಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 60 ಎಡಿಇ 2004, ಬೆಂಗಳೂರು, ದಿನಾಂಕ:31ನೇ ಜನವರಿ, 2007**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಕೃಷ್ಣಪ್ಪ ಪೂಜಾರಿ, ಹಿಂದಿನ ತಹಶೀಲ್ದಾರ್, ಬಂಟ್ವಾಳ, (ಈಗ ನಿವೃತ್ತರು) ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 (1)(ಎ) ರನ್ವಯ ಇವರ ಪಿಂಚಣಿಯಲ್ಲಿ ರೂ.300/- ರಂತೆ 2 ವರ್ಷಗಳ ಅವಧಿಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ**

ಪಿ.ಆರ್. 334

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು-3)

## FORESTS, ECOLOGY AND ENVIRONMENT SECRETARIAT

**Sub:** Diversion of 4.786 ha. of forest land for constructionof proposed 110 KV DC line from JST 1 & 2 line near 110/11 KV subs-station Jog to proposed 110 KV switchyard at MGH Tail race project.

**Read:** 1) Letter NO. A5 (4) GFL.CR.18/ 05-06, Dated:26.12.2005 and 09.10.2006 of the Principal Chief Conservator of Forests, Bangalore.

2) State Government letter No. FEE 04 FGL 2006, Dated:07.04.2006 and 16.11.2006.

3) Government of India Ministry of Environment and Forests, Regional Office, South Zone, Bangalore letter No.4-KRB192/2006-BAN/ 904 Dated:10.08.2006 and letter No.4-KRB192/2006-BAN/1571, Dated:21.11.2006.

**Preamble:**

The Principal Chief Conservator of Forests had sent proposal vide his letter Dated:26.12.2005 read at (1) above for diversion of 4.786 ha. of forest land in Sy.No.118/151, Talakalale village in Jog Reserve Forest of Sagar Division for construction of 110 KV DC line from Mahatma Gandhi Hydro tail (MGHT) race project to 110/11 KV Sub-station at Jog fall in favour of the Exectuive Engineer (Ele), Transmission (W & M) Circle, KPTCL, Shimoga subject to certain conditions.

The proposal of the Principal Chief COnservator of Forest was recommended to Government of India, Ministry of Environment and Forests, Regional Office, South Zone, Bangalore vide Government letter Dated:07.04.2006 read at (2) above seeking prior approval of Government of India under section 2 of Forest (Conservation) Act, 1980.

After careful consideration of the proposal of the State Government Government of India vide its letter Dated:10.08.2006 read at (3) above has agreed in principle subject to the fulfillment of certain conditions.

In compliance of the conditions stipulated by Government of India vide its letter Dated:10.08.2006, the Principal Chief Conservator of Forests vide his letter Dated:09.10.2006 read at (1) above has sent his compliance report. This compliance report was forwarded to Government of India vide State Government letter Dated:16.11.2006 read at (2) above.

Finally Government of India vide its letter Dated:21.11.2006 read (3) above has conveyed its general approval under Section 2 of forest (Conservation) Act, 1980 for diversion of 4.786 ha. of forest land for construction of proposed 110 KV DC line from Jog Shimoga Transmission (JST) 1 & 2 line near 110/11 KV substation Jog to proposed 110 KV switchyard at Mahatma Gandhi Hydro Tail race project at Sy.No.118/151 of Talakalale village in Jog Reserve Forest of Sagar Division in favour of the Executive Engineer, (Ele), Transmission (W & M) Circle, KPTCL, Shimoga subject to certain conditions. Hence the order.

**Govt. Order No. FEE 4FGL 2006, Bangalore, Dated:6th February, 2007**

After examining all aspects of the matter and in view of the approval accorded to the proposal by Government of India, Ministry of environment and Forests, Regional Office (South Zone), Bangalore, Government are pleased to accord its approval under Section 2 of Forest (Conservation) Act, 1980 for diversion of 4.786 ha. of forest land for construction of proposed 110 KV DC line from Jog Shimoga Transmission (JST) 1 & 2 line near 110/11 KV sub-station Jog to propsed 110 KV switchyard at Mahatma Gandhi Hydro Tail race project at Sy.No.118/ 151 of Talakalale village in Jog Reserve Forest of Sagar Division in favour of the Executive Engineer (Ele). Transmission (W & M) Circle, KPTCL, Shimoga subject to the following conditions.

1. Legal status of forest land shall remain unchanged.
2. Compensatory Afforestation (CA) shall be raised over 4.786 ha. of identified non-forest land in Sy.No.438 of Kadurur Village, Sagar Taluk at the cost of user agency. The State Government shall obtain prior permission of central Government for change of location and schedule of CA, if any.
3. Non-forest land for CA shall be notified as RF under Section-4 or PF under section 29 of Indian Forest Act, 1927 or the State Forest Act within a period of 6 months and Nodal Officer (FCA) shall report the compliance.
4. The funds received from the user agency towards CA and NPV under this project shall be transferred to Ad-hoc CAMPA in account number CA 1582 of Corporation Bank, Block-II, CGO Complex, Phase-I, Lodhi Read, New Delhi-11003 under intimation to Central Government.

5. The total forest area utilized for the project shall not exceed 4.786 ha. and shall be used only for the purpose for which it is diverted.
6. Only minimum number of trees shall be cut based on actual requirement for laying the KV line.
7. The lease is for a period of 30 years.
8. The leased out area should be used for the purpose for which it is granted in case the land is not used for the stipulated purpose within one year or when it no longer needed for the stipulated purpose whichever is earlier the area should be forfeited to the forest Department under section 82 of Karnataka Forest Act, 1963. The Conservator of Forests, Shimoga Circle is authorized to take necessary action in this regard.
9. Karnataka Forest Act 1963 and Rules 1969 will be applicable for any violation.
10. The user agency has to pay the compensatory afforestation charges at the rate prevailing at the time of approval.
11. The lessee has to pay the Net Present Value (NPV) fixed by the Govt. Notification No. FEE 247 FGL 2002 Dated: 17.01.2004.
12. Trees shall be felled only when it becomes necessary and under strict supervision of State Forest Department.
13. The user agency shall pay the cost of extraction of trees.
14. The user agency shall abide by all the conditions imposed upon by Government and Principal Chief Conservator of Forests.
15. Any other condition that the State Government or the Chief Conservation of Forests (Central), Regional Office, Bangalore may imposed from time to time in the interest of conservation, protection and development of forests.

By Order and in the name of Governor of Karnataka,
**P.R. KALAVATHI**
Under Secretary to Government,
Forests, Ecology and Environment Department.

PR-335

## ಇಂಧನ ಸಚಿವಾಲಯ

**ವಿಷಯ:** ಮೆ: ವೆನಿಕಾ ಹೈಡ್ರೊ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯ 6.5 ಮೆಗಾ ವ್ಯಾಟ್ ಸಾಮರ್ಥ್ಯದ ಗೊನಾಲ್ ಕಿರು ಜಲ ವಿದ್ಯುತ್ ಯೋಜನೆಯನ್ನು 10.25 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಇಂಇ 277 ಎನ್‌ಸಿಇ 2005 ದಿನಾಂಕ:14.10.2005.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 250 ಎನ್‌ಸಿಇ 2006 ದಿನಾಂಕ:24.06.2006.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 420 ಎನ್‌ಸಿಇ 2006 ದಿನಾಂಕ:08.11.2006.
4. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ.06/ ಗೊನಾಲ್/ 2006/ 240 ದಿನಾಂಕ:20/31.01.2007.

**ಪ್ರಸ್ತಾವನೆ:**

ಓದಲಾದ (1)ರ ಆದೇಶದಲ್ಲಿ ಮೆ: ವೆನಿಕಾ ಹೈಡ್ರೊ ಪ್ರಾಜೆಕ್ಟ್ಸ್ ಲಿಮಿಟೆಡ್ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಶೋರಾಪುರ ತಾಲ್ಲೂಕಿನ ನಾಗರಾಳ ಗ್ರಾಮದ ಬಳಿ ಕೃಷ್ಣ ನದಿಯ ಉಪ ನದಿಯಾದ ದೇವಪುರ ನಾಲೆಗೆ ಅಡ್ಡಲಾಗಿ2.00 ಮೆಗಾ ವ್ಯಾಟ್ ಸಾಮರ್ಥ್ಯದ ಅಂತರಾಳ-ನಾಗರಾಳ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಆದೇಶದಲ್ಲಿ ಸದರಿ ಕಂಪನಿಗೆ ಹಂಚಿಕೆಯಾಗಿರುವ ಸಾಮರ್ಥ್ಯವನ್ನು 2.00 ಮೆಗಾ ವ್ಯಾಟ್‌ನಿಂದ 4.00 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ಯೋಜನೆಯ ಹೆಸರನ್ನು ಗೊನಾಲ್ ಕಿರು ಜಲ ವಿದ್ಯುತ್ ಯೋಜನೆ ಎಂದು ಬದಲಾಯಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಓದಲಾದ (3)ರ ಆದೇಶದಲ್ಲಿ ಸದರಿ ಯೋಜನೆಯ ಸಾಮರ್ಥ್ಯವನ್ನು 4.00 ಮೆಗಾ ವ್ಯಾಟ್‌ನಿಂದ 6.5 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಓದಲಾದ (4)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಯೋಜನಾ ಸ್ಥಳದಲ್ಲಿ ಇನ್ನೂ ಹೆಚ್ಚಿನ ವಿದ್ಯುತ್ ಉತ್ಪಾದಿಸಬಹುದೆಂದು ಅಭಿವೃದ್ಧಿದಾರರು ಮೂರು ಹಂತಗಳಲ್ಲಿ ಯೋಜನೆ ಅನುಷ್ಠಾನ ಮಾಡುವುದಾಗಿ ತಿಳಿಸಿರುವುದರ ಹಿನ್ನಲೆಯಲ್ಲಿ ಗೊನಾಲ್ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 6.5 ಮೆಗಾ ವ್ಯಾಟ್ ನಿಂದ 10.25 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಲು ಈ ಕೆಳಗ ವಿವರಿಸಿದಂತೆ ಶಿಫಾರಸ್ಸು ಮಾಡಿರುತ್ತಾರೆ.

| Project Name | Capacity | Weir | | Power House | |
|---|---|---|---|---|---|
| | | Longitude | Latitude | Longitude | Latitude |
| Gonal SHP-I | 2x875KW | $76^0$38'06" | $16^0$28'36" | $76^0$38'08" | $16^0$28'33" |
| Gonal SHP-II | 2x1000KW | $76^0$39'46" | $16^0$28'00" | $76^0$39'49" | $16^0$27'57" |
| Gonal SHP-III | 2x3250 KW | $76^0$42'37" | $16^0$27'21" | $76^0$42'42" | $16^0$27'18" |
| **Total** | **10.25MW** | | | | |

ಮೇಲಿನ ಶಿಫಾರಸ್ಸನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 36 ಎನ್‌ಸಿಇ 2007, ಬೆಂಗಳೂರು, ದಿನಾಂಕ:14ನೇ ಫೆಬ್ರವರಿ, 2007**

ಸರ್ಕಾರವು ಮೆ: ವೆನಿಕಾ ಹೈಡ್ರೊ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಶೋರಾಪುರ ತಾಲ್ಲೂಕಿನ ನಾಗರಾಳ ಗ್ರಾಮದ ಬಳಿ ಕೃಷ್ಣ ನದಿಯ ಉಪ ನದಿಯಾದ ದೇವಪುರ ನಾಲೆಗೆ ಅಡ್ಡಲಾಗಿ ಹಂಚಿಕೆ ಮಾಡಲಾಗಿರುವ 6.5 ಮೆಗಾ ವ್ಯಾಟ್ ಸಾಮರ್ಥ್ಯದ ಗೊನಾಲ್ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 10.25 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಮೂರು ಹಂತಗಳಲ್ಲಿ ಅನುಷ್ಠಾನ ಮಾಡಲು ಕೆಳಗೆ ವಿವರಿಸಿದಂತೆ ಅನುಮತಿ ನೀಡಲಾಗಿದೆ.

| Project Name | Capacity | Weir | | Power House | |
|---|---|---|---|---|---|
| | | Longitude | Latitude | Longitude | Latitude |
| Gonal SHP-I | 2x875KW | $76^0$38'06" | $16^0$28'36" | $76^0$38'08" | $16^0$28'33" |
| Gonal SHP-II | 2x1000KW | $76^0$39'46" | $16^0$28'00" | $76^0$39'49" | $16^0$27'57" |
| Gonal SHP-III | 2x3250 KW | $76^0$42'37" | $16^0$27'21" | $76^0$42'42" | $16^0$27'18" |
| **Total** | **10.25MW** | | | | |

ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

ಪಿ.ಆರ್. 336

## ENERGY SECRETARIAT

**Sub:** Transfer of 1.5 MW Wind Power Capacity (Wind Mill Project) in favour of M/s Bhagyanagar India Limited (Phase-4) reg.

**Read:** 1. Government order No.DE 26 NCE 1999 Dated:13.05.1999.
2. Government order No.EN 61 NCE 2005 Dated:13.04.2005.
3. Letter No. KRED/08/ BIL (P-4)/ 2007/ 343 Dated:03.02.2007 received from the Managing Director, Karnataka Renewable Energy Development Limited, Bangalore.

**Preamble:**

In the Government Order Dated:13.04.2005 read at (2) above, sanction has been accorded for implementation of 55.00 MW capacity Wind Power Project (Wind Mill Project) at Gadag District to M/s Suzlon Energy Limited.

Now, the Managing Director, Karnataka Renewable Energy Development Limited, Bangalore in his letter Dated:03.02.2007 read at (3) above has recommended to the Government for transfer of 1.5 MW Wind Power capacity (Wind Mill Project) in favour of M/s Bhagyanagar India Limited (Phase-4) from out of sanctioned 55.00 MW Wind Power Capacity at Keluru village, Mundargi Taluk, Gadag District from M/s Suzlon Energy Limited.

The proposal has been examined at the Government level and hence the following order:

**Government Order No. EN 63 NCE 2007, Bangalore, Dated:22nd February, 2007**

Government accords approval for transfer of 1.5 MW Wind Power capacity (Wind Mill Project) in favour of M/s Bhagyanagar India Limited (Phase-4) from out of sanctioned 55.00 MW Wind Power Capacity (Wind Mill Project) allotted to M/s Suzlon Energy Limited at Keluru village, Mundargi Taluk, Gadag District.

The terms and conditions of the Government Order read at (1) above, shall IPSO FACTO applicable.

By Order and in the name of Governor of Karnataka,
**SURESH B. KRISHNAPPANAVAR**
Under Secretary to Government,
Energy Department.

PR-338

**Sub:** Transfer of two Wind Power Capacity (Wind Mill Project) of 1.25 MW each in favour of M/s R. Praveen Chandra-reg.

**Read:** 1. Government order No.DE 26 NCE 1999 Dated:13.05.1999.
2. Government order No.EN 225 NCE 2006 Dated:07.06.2006.
3. Government order No. EN 84 NCE 2006 Dated:21.02.2006.
4. Letter No. KRED/08/ BIL (P-4)/ 2007/ 346 Dated:03.02.2007 received from the Managing Director, Karnataka Renewable Energy Development Limited, Bangalore.

**Preamble:**

In the Government Order Dated:07.06.2006 read at (2) above sanction has been accorded for transfer of 1.25 MW capacity Wind Power Project (Wind Mill Project) at Gadag District, Mundargi Taluk, Mustikopa village in favour of M/s E. Ramamurthy (Phase-2) from out of sanctioned 100 MW wind power capacity of M/s Suzlon energy Limited.

In the Government Order Dated:21.02.2006 read at (3) above sanction has been accorded for transfer of 1.25 MW capacity Wind Power Project (Wind Mill Project) at Gadag Taluk & District, Harugere village in favour of M/s E. Ramaurthy from out of sanctioned 100 MW wind power capacity of M/s Suzlon Energy Limited.

Now, the Managing Director, Karnataka Renewable Energy Development Limited, Bangalore in his letter Dated:03.02.2007 read at (4) above has recommended to the Government for transfer of above two Wind Power Capacity (Wind Mill Project) of 1.25 MW each in favour of M/s R. Praveen Chandra from M/s E. Ramamurthy on account of the death of Sri E. Ramamurthy.

The proposal has been examined at the Government level and hence the following order:

**Government Order No. EN 64 NCE 2007, Bangalore, Dated:22nd February, 2007**

Government accords approval for transfer of two Wind Power Capacity (Wind Mill Project) of 1.25 MW each at Mustikopa village, Mundargi Taluk, Gadag District and Harugere village Gadag Taluk and District in favour of M/s R. Praveen Chandra from M/s E. Ramamurthy.

The terms and conditions of the Government Order read at (1) above, shall IPSO FACTO applicable.

By Order and in the name of Governor of Karnataka,
**SURESH B. KRISHNAPPANAVAR**
Under Secretary to Government,
Energy Department.

PR-339

**Sub:** Transfer of 1.5 MW Wind Power Capacity (Wind Mill Project) in favour of M/s Bhagyanagar India Limited (Phase-5) reg.

**Read:** 1. Government order No.DE 26 NCE 1999 Dated:13.05.1999.
2. Government order No.EN 92 NCE 2005 Dated:13.04.2005.
3. Letter No. KRED/08/ BIL (P-5)/ 2007/ 344 Dated:03.02.2007 received from the Managing Director, Karnataka Renewable Energy Development Limited, Bangalore.

**Preamble:**

In the Government Order Dated:13.04.2005 read at (2) above, sanction has been accorded for implementation of 21.25 MW capacity Wind Power Project (Wind Mill Project) at Gadag District to M/s Suzlon Energy Limited.

Now, the Managing Director, Karnataka Renewable Energy Development Limited, Bangalore in his letter Dated:03.02.2007 read at (3) above has recommended to the Government for transfer of 1.5 MW Wind Power capacity (Wind Mill Project) in favour of M/s Bhagyanagar India Limited (Phase-5) from out of sanctioned 21.25 MW Wind Power Capacity at Jalavadgi village, Mundargi Taluk, Gadag District from M/s Suzlon Energy Limited.

The proposal has been examined at the Government level and hence the following order:

**Government Order No. EN 65 NCE 2007, Bangalore, Dated:22nd February, 2007**

Government accords approval for transfer of 1.5 MW Wind Power capacity (Wind Mill Project) in favour of M/s Bhagyanagar India Limited (Phase-5) from out of sanctioned 21.25 MW Wind Power Capacity (Wind Mill Project) allotted to M/s Suzlon Energy Limited at Jalavadgi village, Mundargi Taluk, Gadag District.

The terms and conditions of the Government Order read at (1) above, shall IPSO FACTO applicable.

By Order and in the name of Governor of Karnataka,
**SURESH B. KRISHNAPPANAVAR**
Under Secretary to Government,
Energy Department.

PR-340

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ:** 2006-2007ನೇ ಸಾಲಿಗೆ ಎಸ್‌ಜಿಎಸ್‌ವೈ ಎರಡನೇ ಕಂತಿನ ರಾಜ್ಯದ ಪಾಲಿನ ಹಣವನ್ನು ಧಾರವಾಡ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ-12022:1:2006 ಎಸ್‌ಜಿಎಸ್‌ವೈ (10) ದಿನಾಂಕ:02.05.2006, (48) ದಿನಾಂಕ:27.11.2006 ಎಸ್‌ಜಿಎಸ್‌ವೈ (54) ದಿನಾಂಕ:05.12.2006, (66) ದಿನಾಂಕ:14.12.2006, (83) ದಿನಾಂಕ:21.12.2006 ಮತ್ತು (102) ದಿನಾಂಕ:09.01.2007 ಹಾಗೂ (122) ದಿನಾಂಕ:24.01.2007.

2. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 20 ಎಸ್‌ಜೆವೈ 2006, ದಿನಾಂಕ:19.05.2006, 25.01.2007, 03.02.2007 ಮತ್ತು 23.02.2007.

3. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ-12022:1:2006 ಎಸ್‌ಜಿಎಸ್‌ವೈ 122 ದಿನಾಂಕ:24.01.2007.

**ಪ್ರಸ್ತಾವನೆ:**

ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳು ಮೇಲೆ ಓದಲಾದ (1) ಮತ್ತು (2) ರಲ್ಲಿ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) ಮೊದಲನೇ ಕಂತಿನ ಹಣ ರೂ.22,22,51,000 ಮತ್ತು ರೂ.7,40,85,000 ಗಳನ್ನು ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತ್‌ಗಳಿಗೆ ಹಾಗೂ ಎರಡನೆ ಕಂತಿನ ಹಣ ರೂ.16,51,39,000 ಮತ್ತು ರೂ.4,40,62,334 ಲಕ್ಷಗಳನ್ನು 21 ಜಿಲ್ಲಾ ಪಂಚಾಯತ್‌ಗಳಿಗೆ ಬಿಡುಗಡೆ ಮಾಡಿವೆ. ಕೇಂದ್ರ ಸರ್ಕಾರವು ಎಸ್‌ಜಿಎಸ್‌ವೈ ಯಡಿ ಎರಡನೇ ಕಂತಿನ ಹಣ ರೂ.35,87,000 ಲಕ್ಷಗಳನ್ನು ಬಿಡುಗಡೆ ಮಾಡಿದೆ. ಅದಕ್ಕನುಗುಣವಾಗಿ ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನ ರೂ.10,96,000 (ಹನ್ನೊಂದು ಲಕ್ಷದ ತೊಂಬತ್ತಾರು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಬಿಡುಗಡೆ ಮಾಡಬೇಕಾಗಿತ್ತು. ಆದರೆ, ರಾಜ್ಯದ ಆಯವ್ಯಯದಲ್ಲಿ ಒದಗಿಸಿದ ಅನುದಾನದ ಲಭ್ಯವಿರುವ ಅನುದಾನ ರೂ.11,82,000 (ಹನ್ನೊಂದು ಲಕ್ಷದ ಎಂಬತ್ತೆರಡು ಸಾವಿರ) ಗಳನ್ನು ಮಾತ್ರ ಧಾರವಾಡ ಜಿಲ್ಲಾ ಪಂಚಾಯಿತಿಗೆ ಬಿಡುಗಡೆ ಮಾಡಲಾಗುತ್ತಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 20 ಎಸ್‌ಜೆವೈ 2006, ಬೆಂಗಳೂರು, ದಿನಾಂಕ:23ನೇ ಫೆಬ್ರವರಿ, 2007**

ರಾಜ್ಯ ಸರ್ಕಾರವು ಧಾರವಾಡ ಜಿಲ್ಲಾ ಪಂಚಾಯತ್‌ಗೆ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) ಎರಡನೇ ಕಂತಿನ ಹಣ ರೂ.11,82,000 (ಹನ್ನೊಂದು ಲಕ್ಷದ ಎಂಬತ್ತೆರಡು ಸಾವಿರ) ಗಳನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

| ಕ್ರ. ಸಂ. | ಜಿಲ್ಲಾ ಪಂಚಾಯತಿ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಎರಡನೇ ಕಂತಿನ ಅನುದಾನ | ರಾಜ್ಯ ಸರ್ಕಾರವು ಬಿಡುಗಡೆ ಮಾಡಬೇಕಿದ್ದ ಎರಡನೇ ಕಂತಿನ ಅನುದಾನ | ರಾಜ್ಯ ಸರ್ಕಾರವು ಬಿಡುಗಡೆ ಮಾಡುತ್ತಿರುವ ಎರಡನೇ ಕಂತಿನ ಅನುದಾನ |
|---|---|---|---|---|---|---|
| 1. | ಧಾರವಾಡ | 415 | 2500zz8798 | 35,87,000 | 11,96,000 | 11,82,000 |

**ಷರತ್ತುಗಳು ಈ ಕೆಳಗಿನಂತಿವೆ:**

1999 ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ನಿಧಿಯ ಮಾದರಿ ಕೇಂದ್ರ ಮತ್ತು ರಾಜ್ಯದಲ್ಲಿ ನಡುವೆ 75:25ರ ಅನುಪಾತದಲ್ಲಿ ನೀಡಲಾಗುವುದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ 2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು ಪಂಚಾಯತ್‌ಗಳು-01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 198 ಗ್ರಾಮಪಂಚಾಯತ್‌ಗಳಿಗೆ ಸಹಾಯ 6 ಗ್ರಾಮ ಪಂಚಾಯತ್‌ಗಳು 01, ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2006-2007 (2501-01-198-6-01) ರಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 7 ಜಡ್‌ಪಿಎ 2003 ದಿನಾಂಕ:14.07.2005ರನ್ವಯ ಖಜಾನೆಯಿಂದ ಅನುದಾನ ಪಡೆದು ಎಸ್‌ಜಿಎಸ್‌ವೈಯಡಿ ತೆರೆದಿರುವ ಗ್ರಾಮ ಪಂಚಾಯತ್‌ಗಳ ಬ್ಯಾಂಕ್ ಖಾತೆಗೆ ಚೆಕ್ ಮೂಲಕ ಬಿಡುಗಡೆ ಮಾಡುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಯ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ. ಈ ಯೋಜನೆಯಡಿ ಕೇಂದ್ರ ಸರ್ಕಾರವು ನೇರವಾಗಿ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿರುವ ಅನುದಾನ ಮತ್ತು ರಾಜ್ಯದ ಪಾಲಿನ ಅನುದಾನವೂ ಸೇರಿ ಗ್ರಾಮ ಪಂಚಾಯತಿಗಳ ಸಂಬಂಧಿಸಿದ ಬ್ಯಾಂಕ್ ಖಾತೆಗೆ ಅನುದಾನ ಜಮೆ ಮಾಡುವ ಬಗ್ಗೆ ಕ್ರಮ ಕೈಗೊಳ್ಳುವುದು.

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಮಾಡುವುದು.

2006-2007ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಯೋಜನೇ ನಿರ್ದೇಶಕರು (ಡಿಆರ್‌ಡಿಎ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆರ್ಥಿಕ ಮತ್ತು ಭೌತಿಕ ಸಾಧನೆಯ ಪ್ರತಿ ಮಾಹೆಯ ಪ್ರಗತಿ ವರದಿಯನ್ನು ಮುಂದಿನ ತಿಂಗಳ 10ನೇ ತಾರೀಖಿನೊಳಗೆ ಆನ್‌ಲೈನ್ ಮೂಲಕ ನಿರ್ದೇಶಕರು (ಸ್ವಉಕಾ), ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು (ಸ್ವಉಕಾ) ಹಾಗೂ. ಪ.ನಿ. ಸರ್ಕಾರದ ಅಪರ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ: ಗ್ರಾಅಪ 70 ಪಿಬಿಎಸ್ 2007 ದಿನಾಂಕ:23.02.2007 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶಾಂತರಾಜ್**

ನಿರ್ದೇಶಕರು (ಸ್ವಉಕಾ) ಹಾಗೂ

ಪ.ನಿ. ಸರ್ಕಾರದ ಅಪರ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

ಪಿ.ಆರ್. 357